

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1109
ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ),
ಉತ್ತರಿಸಬೇಕಾದ ದಿನಾಂಕ : 21.09.2021
ಉತ್ತರಿಸುವ ಸಚಿವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ | Reply |
|---|---|---|---|
| ಅ) | ಎನ್.ಜಿ.ಇ.ಎಫ್. ಕಾರ್ಖಾನೆಯನ್ನು ಮತ್ತೆ ಪ್ರಾರಂಭಿಸುವ ಚಿಂತನೆ ಸರ್ಕಾರಕ್ಕಿದೆಯೇ; | ಇಲ್ಲ | No |
| ಆ) | ಮಾಜಿ ಮುಖ್ಯಮಂತ್ರಿ ಶ್ರೀ ಎಸ್. ಆರ್. ಬೊಮ್ಮಾಯಿ ಅವರ ಕಾಲದಲ್ಲಿ ಹುಬ್ಬಳ್ಳಿಯಲ್ಲಿ ಎನ್.ಜಿ.ಇ.ಎಫ್. ಶಾಖೆ ಪ್ರಾರಂಭವಾಗಿದ್ದು, ಈಗಲೂ ಅದು ಯಶಸ್ವಿಯಾಗಿ ನಡೆಯುತ್ತಿದೆ; ಅದೇ ರೀತಿ ಬೆಂಗಳೂರಿನಲ್ಲೂ ಈ ಕಾರ್ಖಾನೆಯನ್ನು ಪುನರುಜ್ಜೀವನಗೊಳಿಸಲು ಸರ್ಕಾರ ಏಕೆ ಪ್ರಯತ್ನಿಸಬಾರದು; | ಅಪಾರ ನಷ್ಟದ ದೆಸೆಯಿಂದಾಗಿ ಕಂಪನಿಯನ್ನು ಪರಿಸಮಾಪ್ತಿಗೊಳಿಸುವಂತೆ ಬಿ.ಐ.ಎಫ್.ಆರ್ ದಿನಾಂಕ: 02/08/2002 ರಂದು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಶಿಫಾರಸ್ಸು ಮಾಡಿತು. ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 03.08.2004ರ ಆದೇಶದಲ್ಲಿ ಎನ್.ಜಿ.ಇ.ಎಫ್ ಕಂಪನಿಯನ್ನು ಪರಿಸಮಾಪ್ತಿ(Windup) ಗೆ ಆದೇಶಿಸಿತು. ತದನಂತರ ಎನ್.ಜಿ.ಇ.ಎಫ್. ಕಾರ್ಖಾನೆ ಮತ್ತು ಆಸ್ತಿಯು ಪರಿಸಮಾಪನಾಧಿಕಾರಿಗಳು (Official Liquidator) ರವರ ಅಧೀನದಲ್ಲಿತ್ತು. ಕರ್ನಾಟಕ ಸರ್ಕಾರವು CA 184/2015ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಕಾರ್ಖಾನೆಯ ಪರಿಸಮಾಪ್ತಿ ಆದೇಶಕ್ಕೆ ತಡೆಯಾಜ್ಞೆ ಕೋರಿ ಅರ್ಜಿ ಸಲ್ಲಿಸಿತ್ತು. ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ: 22.06.2017 ರಲ್ಲಿ ಕಾರ್ಖಾನೆಯ ಪರಿಸಮಾಪ್ತಿ ಆದೇಶಕ್ಕೆ ಶಾಶ್ವತವಾಗಿ ತಡೆಯಾಜ್ಞೆ ನೀಡಿ ಎನ್.ಜಿ.ಇ.ಎಫ್.ನ ಭೂಮಿಯನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸಲು ಸೂಚಿಸಿದೆ.<br><br>ದಿನಾಂಕ: 08.06.2021 ರಂದು "Bengaluru Heritage & Environment Trust" ಹೆಸರಿನಲ್ಲಿ ಸಾರ್ವಜನಿಕ ದತ್ತಿ ಸಂಸ್ಥೆಯನ್ನು ನೋಂದಣಿ ಮಾಡಲಾಗಿದೆ. ಸದರಿ ಟ್ರಸ್ಟ್ ಎನ್.ಜಿ.ಇ.ಎಫ್.ನ ಭೂಮಿ ಮತ್ತು ಕಟ್ಟಡವನ್ನು ಉಪಯೋಗಿಸಿಕೊಳ್ಳುವ ಬಗ್ಗೆ ಪರಿಕಲ್ಪನೆ ಸಿದ್ಧಪಡಿಸುತ್ತಿದೆ. | On 02.08.2002 BIFR has recommended to wind up the company to the High Court. The Hon'ble High Court vide its order dt.:03.08.2004 has ordered to wind up the company and appointed Official Liquidator. Govt. of Karnataka filed CA No.184/2015 to recall winding up order. The Hon'ble High Court vide order dt.:22.06.2017 stayed permanently the winding up order based on the submission made by GOK and directed to utilize the land only for public purpose.<br><br>A public charitable trust "Bengaluru Heritage & Environment Trust" was registered on 08.06.2021. The trust is preparing a concept paper on utilizing the NGEF land and building. |

| | | | |
|---|---|---|---|
| ಇ) | ಈ ಕಾರ್ಖಾನೆಗೆ ಸಂಬಂಧಿಸಿದಂತೆ ಭೂಮಿ ಮತ್ತು ಹಣ ಈಗಲೂ ಇದ್ದು, ಇದನ್ನು ಉಪಯೋಗಿಸಿಕೊಂಡು ಕಾರ್ಖಾನೆ ಪ್ರಾರಂಭಿಸಿದರೆ, ಕನ್ನಡಿಗರಿಗೆ ಉದ್ಯೋಗಾವಕಾಶವನ್ನು ಕಲ್ಪಿಸಬಹುದಲ್ಲವೆ: | ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ: 22.06.2017ರಲ್ಲಿ ಕಾರ್ಖಾನೆಯ ಪರಿಸಮಾಪ್ತಿ ಆದೇಶಕ್ಕೆ ಶಾಶ್ವತವಾಗಿ ತಡೆಯಾಜ್ಞೆ ನೀಡಿ ಎನ್.ಜಿ.ಇ.ಎಫ್.ನ ಭೂಮಿಯನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸಲು ಸೂಚಿಸಿರುವುದರಿಂದ ಮೊದಲನೇ ಹಂತದಲ್ಲಿ ಎನ್.ಜಿ.ಇ.ಎಫ್ ನ ಭೂಮಿ ಮತ್ತು ಕಟ್ಟಡದ ಆವರಣದಲ್ಲಿ ಸಾರ್ವಜನಿಕರ ಉಪಯೋಗಕ್ಕಾಗಿ ಸುಮಾರು 60-00 ಎಕರೆ ಪ್ರದೇಶದಲ್ಲಿ ನೈಸರ್ಗಿಕವಾಗಿ ಬೆಳೆದ ಮರಗಳಿದ್ದು, ಅದನ್ನು ಹಾಗೆಯೇ ಉಳಿಸಿಕೊಂಡು ಕಾಲು ದಾರಿ, ಸ್ಕೈ ವಾಕ್, ಕೃತಕ ಕೊಳ ನಿರ್ಮಿಸಿ ಸಾರ್ವಜನಿಕರಿಗೆ ಪರಿಸರವನ್ನು ಆನಂದಿಸುವ ಅವಕಾಶ ಕಲ್ಪಿಸಲು ಯೋಜಿಸಲಾಗಿದೆ.<br><br>ಎರಡನೇ ಹಂತದಲ್ಲಿ ಎನ್.ಜಿ.ಇ.ಎಫ್. ಕಾರ್ಖಾನೆ ಕಟ್ಟಡ / ಶೆಡ್ ಗಳ ರಚನಾತ್ಮಕ ವಿಶ್ಲೇಷಣೆಯನ್ನು ಕೈಗೊಂಡು ಅದರ ಆಧಾರದ ಮೇಲೆ ಈ ಕಟ್ಟಡ ಹಾಗು ಶೆಡ್ ಗಳನ್ನು ಪ್ರದರ್ಶನ ಸಭಾಂಗಣವಾಗಿ ಕರ್ನಾಟಕದ ಕಲೆ ಮತ್ತು ಸಂಸ್ಕೃತಿಯನ್ನು ಪ್ರದರ್ಶಿಸಲು ಹಾಗು ಇತರೆ ಚಟುವಟಿಕೆಗಳಿಗೆ ಮರುಬಳಕೆ ಮಾಡಲು ಯೋಜಿಸಲಾಗುತ್ತಿದೆ. | Hon'ble High Court order dated: 22.06.2017 stayed permanently the winding up order based on the submission made by GOK and directed to utilize land only for public purpose. Accordingly, it is planned to create walking path, artificial pond, sky walk in phase-1 in 60 acres green space available on NGEF site and public will be allowed to enjoy natural green environment.<br><br>Under phase-2; it is planned to carry out a structural analysis of the NGEF factory building/sheds and reuse these buildings and sheds as an exhibition hall to showcase the art and culture of Karnataka and for other activities. |
| `0 | ಸದರಿ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಕೆಲವು ನೌಕರರ ವಿಚಾರ ನ್ಯಾಯಾಲಯದ ಮುಂದಿದ್ದು, ಅದನ್ನು ಇತ್ಯರ್ಥಪಡಿಸಿ, ಈ ಕಾರ್ಖಾನೆಯನ್ನು ಪುನಃ ಪ್ರಾರಂಭಿಸಲು ಸರ್ಕಾರ ಗಂಭೀರವಾಗಿ ಆಲೋಚಿಸುತ್ತಿದೆಯೇ? | ಕಾರ್ಖಾನೆಯನ್ನು ಪುನಃ ಪ್ರಾರಂಭಿಸುವ ಬಗ್ಗೆ ಯಾವುದೇ ಪ್ರಸ್ತಾವನೆ ಇಲ್ಲ. | There is no proposal to restart the factory. |

ಸಿಐ 15 ಸಿಇಎಲ್ 2021(ಇ)

(ಮುರುಗೇಶ ಆರ್.ನಿರಾಣಿ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು